

# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 30(249)
2. ಸದಸ್ಯರ ಹೆಸರು : ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 22.09.2020
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಮೈಸೂರ್ ಲ್ಯಾಂಪ್ಸ್ ಉದ್ಯಮವನ್ನು ಯಾವಾಗ ಎಲ್ಲಿ ಪ್ರಾರಂಭಿಸಲಾಯಿತು; ಇದರ ಇತಿಹಾಸ ಹಾಗು ಧ್ಯೇಯೋದ್ದೇಶಗಳೇನು; (ವಿವರವಾದ ಮಾಹಿತಿ ನೀಡುವುದು) | ದಿ ಮೈಸೂರ್ ಲ್ಯಾಂಪ್ ವರ್ಕ್ಸ್ ಲಿಮಿಟೆಡ್‌ಯನ್ನು ಬೆಂಗಳೂರಿನಲ್ಲಿ 26.08.1936ರಲ್ಲಿ ಸ್ಥಾಪಿಸಲಾಯಿತು. ಪ್ರಾರಂಭದಲ್ಲಿ ಸಂಸ್ಥೆಯ ಆಡಳಿತವನ್ನು ಮ್ಯಾನೇಜಿಂಗ್ ಏಜೆಂಟ್, ಮೆ\|\| ದಿ ಎಲೆಕ್ಟ್ರಿಕಲ್ ಇಂಡಸ್ಟ್ರೀಸ್ ಲಿ., ರವರು ನಡೆಸುತ್ತಿದ್ದರು.<br><br>ಮುಖ್ಯವಾಗಿ ಸಂಸ್ಥೆಯು ವಿದ್ಯುತ್ ದೀಪಗಳ ತಯಾರಿಕೆ, ದೀಪಗಳಿಗೆ ಅವಶ್ಯವಾದ ಬಿಡಿ ಭಾಗಗಳ ತಯಾರಿಕೆ ಹಾಗೂ ಮಾರಾಟ, ವಿದ್ಯುತ್ ಉಪಕರಣಗಳ ಮಾರಾಟ ಮತ್ತು ಟರ್ನ್‌ಕೀ ಯೋಜನೆಗಳನ್ನು ನಿರ್ವಹಿಸುತ್ತಿತ್ತು.<br><br>ಪ್ರಾರಂಭದಲ್ಲಿ ಶ್ರೀಮಾನ್ ಮೈಸೂರು ಮಹಾರಾಜರು ಸಂಸ್ಥೆಯ ಕಾರ್ಯಾಚರಣೆಗಳಿಗೆ ಸಹಾಯವನ್ನು ನೀಡಿದ್ದರು.<br><br>ಮೆ\|\| ದಿ ಎಲೆಕ್ಟ್ರಿಕಲ್ ಇಂಡಸ್ಟ್ರೀಸ್ ಲಿ., ರವರು ದಿನಾಂಕ 12.04.1941ರಿಂದ ಏಜೆನ್ಸಿಯನ್ನು ಪರಿತ್ಯಜಿಸಿದ ನಂತರ ಸಂಸ್ಥೆಯ ಆಡಳಿತವನ್ನು ಸರ್ಕಾರದ ಅನುಮತಿಯೊಂದಿಗೆ ನಿರ್ದೇಶಕರುಗಳ ಮಂಡಳಿಯು ಕಾರ್ಯ ನಿರ್ವಾಹಕರು ಮತ್ತು ಕಾರ್ಯದರ್ಶಿಗಳ ಮೂಲಕ ನಿರ್ವಹಿಸಲು ಪ್ರಾರಂಭಿಸಿತು.<br><br>ಸಂಸ್ಥೆಯು ಷೇರು ಬಂಡವಾಳವನ್ನು ಹೂಡಲು ಸರ್ಕಾರವನ್ನು ಸಂಪರ್ಕಿಸಿತು. ದಿನಾಂಕ 15.09.1941ರಂದು ಸರ್ಕಾರವು ಸಂಸ್ಥೆಯಲ್ಲಿ ಬಂಡವಾಳ ತೊಡಗಿಸಲು ಪ್ರಾರಂಭಿಸಿತು. |

| | | |
|---|---|---|
| | | ಸಂಸ್ಥೆಯು 1963ರಲ್ಲಿ General Electric Co., USA ಯೊಂದಿಗೆ ಸಹಯೋಜನೆ ಒಪ್ಪಂದ ಮಾಡಿಕೊಂಡಿತು. ಒಪ್ಪಂದದ ನಿಬಂಧನೆಯಂತೆ ನಿರ್ದೇಶಕರುಗಳ ಮಂಡಳಿಯನ್ನು ದಿನಾಂಕ 26.07.1963ರಂದು ಪುನರ್ ರಚಿಸಲಾಯಿತು.<br><br>ಕೊಳವೆ ದೀಪಗಳ ತಯಾರಿಕಾ ಘಟಕದ ಸ್ಥಾಪನೆಯನ್ನು 1964-65 ಮತ್ತು 1965-66ರಲ್ಲಿ ಉತ್ಪಾದನೆಯ ವಿಸ್ತರಣೆಯ ಅಂಗವಾಗಿ ಕೈಗೊಳ್ಳಲಾಯಿತು.<br><br>General Electric Co., USA FERA Regulationsಗೆ ಸಂಬಂಧಿಸಿದಂತೆ, ಕೇಂದ್ರ ಹಣಕಾಸು ಮಂತ್ರಾಲಯ ಹಾಗೂ ಕಂಪನಿ ಲಾ ಬೋರ್ಡ್‌ನ ಅನುಮೋದನೆಯೊಂದಿಗೆ, ತನ್ನ ಷೇರು ಬಂಡವಾಳವನ್ನು (ಸಂಸ್ಥೆಯ ಶೇ. 49) NGEF Limited ಸಂಸ್ಥೆಗೆ ದಿನಾಂಕ 27.03.1979ರಂದು ವರ್ಗಾಯಿಸಿತು. ಇದರಿಂದಾಗಿ ಸಂಸ್ಥೆಯು ಕಂಪನೀಸ್ ಆಕ್ಟ್ 1956ರ ಸೆಕ್ಷನ್ 619(B) ರಂತೆ ಸರ್ಕಾರದ ಕಂಪನಿಯಾಯಿತು.<br><br>ಸಂಸ್ಥೆಯು 1994ರವರೆವಿಗೂ ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿದ್ದು, 31.3.1996ರಂತೆ ಸಂಸ್ಥೆಯ ನಿವ್ವಳ ಮೌಲ್ಯದ ಸಂಪೂರ್ಣ ಸವೆತದಿಂದಾಗಿ ಡಿಸೆಂಬರ್ 1996ರಲ್ಲಿ ಸಂಸ್ಥೆಯನ್ನು BIFR ನಲ್ಲಿ ಒಂದು ರೋಗಗ್ರಸ್ತ ಸಂಸ್ಥೆಯೆಂದು ದಾಖಲಿಸಲಾಯಿತು.<br><br>BIFR 18.07.2000ರ ಆದೇಶದಲ್ಲಿ ಒಂದು ನಿರ್ದಿಷ್ಟ ಅವಧಿಯಲ್ಲಿ ನಷ್ಟವನ್ನು ತೊಡೆದುಹಾಕಿ ನಿವ್ವಳ ಮೌಲ್ಯವನ್ನು ಹೆಚ್ಚಿಸುವ ಸಾಧ್ಯತೆಯಿಲ್ಲವೆಂಬ ಅಭಿಪ್ರಾಯದೊಂದಿಗೆ ಸಂಸ್ಥೆಯನ್ನು ಸಮಾಪನಗೊಳಿಸಲು ಶಿಫಾರಸ್ಸು ಮಾಡಿತು.<br><br>ಸಂಸ್ಥೆಯು BIFR ನ ಶಿಫಾರಸ್ಸಿಗೆ ಎದುರಾಗಿ AAIFR ನಲ್ಲಿ ಅಪೀಲ್ ದಾಖಲಿಸಿತು. AAIFR ದಿನಾಂಕ: 18.07.2001ರಂದು BIFR ನ ಆದೇಶವನ್ನು ಎತ್ತಿ ಹಿಡಿಯಿತು.<br><br>BIFRನ ಆದೇಶದ ಆಧಾರದ ಮೇರೆಗೆ ಕರ್ನಾಟಕದ ಉಚ್ಛ ನ್ಯಾಯಾಲಯವು ಪೆಟಿಷನ್ ಸಂ. Co.P.231/2000ನ್ನು ದಾಖಲಿಸಲಾಯಿತು. ಸದರಿ ಅರ್ಜಿಗೆ ಸರ್ಕಾರ ಹಾಗೂ ಸಂಸ್ಥೆಯು ಯಾವುದೇ ಆಕ್ಷೇಪಣೆಯನ್ನು ಸಲ್ಲಿಸಿರುವುದಿಲ್ಲ. |

| | | |
|---|---|---|
| | | ನೌಕರರ ಸಂಘವು ಕಂಪನಿ ಪೆಟಿಷನ್ ಸಂ..231/2000 ಕ್ಕೆ ಆಕ್ಷೇಪಣೆ ಸಲ್ಲಿಸಿ, ಸಂಸ್ಥೆಯನ್ನು ಪುನರುಜ್ಜೀವನಗೊಳಿಸಲು ಪ್ರಾರ್ಥಿಸಿದ್ದರು.<br>ಸರ್ಕಾರವು ಸಂಸ್ಥೆಯಲ್ಲಿ ಶೇ 91.07ರಷ್ಟು ನೇರವಾಗಿ ಷೇರು ಬಂಡವಾಳವನ್ನು ಹೊಂದಿದ್ದು, ಸರ್ಕಾರದ ಮತ್ತೊಂದು ಸಾರ್ವಜನಿಕ ಉಧ್ಯಮವಾದ NGEF Limited ಶೇ.3.33ರಷ್ಟು ಷೇರು ಬಂಡವಾಳವನ್ನು ಹೊಂದಿರುತ್ತದೆ. ಉಳಿದ ಶೇ 5.6 ಷೇರುಗಳನ್ನು ಸಾರ್ವಜನಿಕರು ಹಾಗೂ ಇತರರು ಹೊಂದಿರುತ್ತಾರೆ. ಸಂಸ್ಥೆಯ ಒಟ್ಟು ಷೇರು ಬಂಡವಾಳವು ರೂ.11.81 ಕೋಟಿಗಳಾಗಿರುತ್ತದೆ.<br>ದಿನಾಂಕ 04.01.2002ರಂದು ಸಂಸ್ಥೆಯನ್ನು ಮುಚ್ಚಲು ಸರ್ಕಾರವು ಆದೇಶಿಸಿದೆ, ಹಾಗೂ ಸಂಸ್ಥೆಯು ತನ್ನ ಕಾರ್ಯಾಚರಣೆಗಳನ್ನು ದಿನಾಂಕ: 11.06.2003ರಿಂದ ಸ್ಥಗಿತಗೊಳಿಸಿ ಸಂಸ್ಥೆಯನ್ನು ಮುಚ್ಚಿ ಆ ದಿನದಂತೆ ಉಳಿದ ಎಲ್ಲಾ ನೌಕರರನ್ನು ಕರ್ತವ್ಯದಿಂದ ವಿಮುಕ್ತಿಗೊಳಿಸಲಾಗಿದೆ. |
| (ಆ) | ಈ ಕಂಪನಿಗೆ ಪ್ರಾರಂಭದಿಂದ ಇಲ್ಲಿಯವರೆಗೂ C.M.Dಗಳು ಯಾರು ಯಾರು; ಯಾರ ಕಾಲದಲ್ಲಿ ಕಂಪನಿ ಲಾಭದಲ್ಲಿತ್ತು ಮತ್ತು ಯಾವ ಕಾಲದಲ್ಲಿ ಕಂಪನಿ ನಷ್ಟದಲ್ಲಿತ್ತು; ನಷ್ಟದಲ್ಲಿರಲು ಕಾರಣಗಳೇನು; (ವರ್ಷವಾರು ವಿವರವಾದ ಮಾಹಿತಿ ನೀಡುವುದು) | ಸಂಸ್ಥೆಯ ಪ್ರಾರಂಭದಿಂದ ದಿನಾಂಕ:31.03.2019ರವರೆಗೆ ಅಧ್ಯಕ್ಷರು-ವ್ಯವಸ್ಥಾಪಕ ನಿರ್ದೇಶಕರ ಮತ್ತು ನಷ್ಟದಲ್ಲಿರಲು ಕಾರಣಗಳ ವಿವರವಾದ ಪಟ್ಟಿಯನ್ನು ಅನುಬಂಧ – I ರಲ್ಲಿ ನೀಡಲಾಗಿದೆ. |
| (ಇ) | ಮೈಸೂರು ಲ್ಯಾಂಪ್ಸ್ ಕಂಪನಿಯ ಆಸ್ತಿಗಳು ಯಾವುವು; ಅವುಗಳು ಎಲ್ಲಿವೆ; ಅವುಗಳ ಇಂದಿನ ಮೌಲ್ಯವೇನು; ಇದರ ಮೇಲೆ ಸರ್ಕಾರದ ಹೊಣೆಗಾರಿಕೆ ಎಷ್ಟಿದೆ; (ವಿವರವಾದ ಮಾಹಿತಿ ನೀಡುವುದು) | ವಿವರಣೆಗಳನ್ನು ಅನುಬಂಧ – II ರಲ್ಲಿ ನೀಡಲಾಗಿದೆ. |
| (ಈ) | ಈ ಕಂಪನಿಯನ್ನು ಸರ್ಕಾರವು ನೇರವಾಗಿ ತನ್ನ ವಶಕ್ಕೆ ಪಡೆಯುವಂತೆ ಆದೇಶ ಮಾಡಿರಲು ಕಾರಣಗಳೇನು;(ವಿವರವಾದ ಮಾಹಿತಿಯೊಂದಿಗೆ ಆದೇಶದ ಪ್ರತಿಗಳನ್ನು ನೀಡುವುದು) | ಮೈಸೂರು ಲ್ಯಾಂಪ್ ವರ್ಕ್ಸ್ ಲಿಮಿಟೆಡ್ ನ 79 ಕಾರ್ಮಿಕರಿಗೆ ಈಗಾಗಲೇ ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೋರೇಷನ್ ಲಿಮಿಟೆಡ್ ನಲ್ಲಿ ಉದ್ಯೋಗ ನೀಡಿರುವುದರಿಂದ ಹಾಗು ಇವರುಗಳು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಿದವರಾಗಿದ್ದು, ಈ ಹಂತದಲ್ಲಿ ಸರ್ಕಾರದ ವತಿಯಿಂದ ಮೈಸೂರು ಲ್ಯಾಂಪ್ಸ್ ವರ್ಕ್ಸ್ ಸಂಸ್ಥೆಯನ್ನು ಸ್ವಾಧೀನ ಪ್ರಕ್ರಿಯೆ ನಡೆಸಲು ತೀರ್ಮಾನಿಸಿದಲ್ಲಿ ನ್ಯಾಯಾಲಯದಲ್ಲಿನ ಕಾರ್ಮಿಕರ ದಾವೆಗಳು ಮತ್ತು ಅಲ್ಪ ಸಂಖ್ಯಾತ ಷೇರುದಾರರ ವಿಷಯಗಳನ್ನು ಇತ್ಯರ್ಥಗೊಳಿಸುವ ಕಾರ್ಯಗಳು |

| | | |
|---|---|---|
| | | ಇತ್ಯರ್ಥಗೊಳ್ಳಲು ಬಹಳ ಸಮಯ ಹಿಡಿಯುವ ಕಾರಣ, ಪ್ರಕ್ರಿಯೆಯು ವಿಳಂಭವಾಗುವುದರಿಂದ ಹಾಗೂ ಈ ಸಂಸ್ಥೆಯನ್ನು ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೋರೇಷನ್ ಲಿಮಿಟೆಡ್ ಸಂಸ್ಥೆಯೊಂದಿಗಿನ ವಿಲೀನತೆಯ ಮಾನ್ಯ ಉಚ್ಚನ್ಯಾಯಾಲಯದ ಪ್ರಕರಣಗಳು ತೀರ್ಪಿನ ಹಂತಕ್ಕೆ ತಲುಪಿರುವುದನ್ನು ಗಮನದಲ್ಲಿರಿಸಿಕೊಂಡು, ಈ ಕಂಪನಿಯನ್ನು ಸರ್ಕಾರವು ನೇರವಾಗಿ ತನ್ನ ವಶಕ್ಕೆ ತೆಗೆದುಕೊಳ್ಳದೆ ಮೈಸೂರು ಮಿನರಲ್ಸ್ ಕಂಪನಿಗೆ ಸಂಯೋಜನೆ ವಿಲೀನಗೊಳಿಸಿ ನಂತರ ಸರ್ಕಾರದ ವಶಕ್ಕೆ ಪಡೆಯಲು ಆದೇಶಿಸಲಾಗಿರುತ್ತದೆ. |
| (ಉ) | ನಗರದ ಹೃದಯ ಭಾಗದಲ್ಲಿರುವ ಕಂಪನಿಯ ಆಸ್ತಿಯನ್ನು ಸರ್ಕಾರವೇ ನೇರವಾಗಿ ತನ್ನ ವಶಕ್ಕೆ ತೆಗೆದುಕೊಂಡು ಉತ್ತರ ಕರ್ನಾಟಕದ ಜನತೆಗೆ ಅನುಕೂಲವಾಗುವಂತೆ ಜಯದೇವ/ವಿಕ್ಟೋರಿಯಾದಂತಹ ಉನ್ನತ ಮಟ್ಟದ ಸರ್ಕಾರಿ ಆಸ್ಪತ್ರೆಯನ್ನು ಕಟ್ಟಲು ಚಿಂತನೆ ನಡೆಸಿದೆಯೇ? | ಪ್ರಸ್ತುತ, ಈ ಚಿಂತನೆಯು ಸರ್ಕಾರದ ಮುಂದೆ ಇರುವುದಿಲ್ಲ. |

ಸಂ. ಸಿಐ 18 ಸಿಇಎಲ್ 2020(ಇ)

(ಜಗದೀಶ್ ಶೆಟ್ಟರ್)

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು.

ಅನುಬಂಧ - I

| ಕ್ರ.ಸಂ. | ದಿನಾಂಕದ ಅಂತ್ಯಕ್ಕೆ | ದಿನಾಂಕದ ಅಂತ್ಯಕ್ಕೆ ಸ್ಥಿತಿ ವಿವರಣೆ ಪಟ್ಟಿಗೆ ವರ್ಗಾಯಿಸಿದ ಲಾಭದ ಮೊತ್ತ (ರೂ.ಗಳಲ್ಲಿ) | ದಿನಾಂಕದ ಅಂತ್ಯಕ್ಕೆ ಸ್ಥಿತಿ ವಿವರಣೆ ಪಟ್ಟಿಗೆ ವರ್ಗಾಯಿಸಿದ ನಷ್ಟದ ಮೊತ್ತ (ರೂ.ಗಳಲ್ಲಿ) | ಮ್ಯಾನೇಜಮೆಂಟ್ ಏಜಂಟ್ / ಅಧ್ಯಕ್ಷರು / ಕಂಟ್ರೋಲರ್ | ವ್ಯವಸ್ಥಾಪಕ ನಿರ್ದೇಶಕರು | ಷರಾ |
|---|---|---|---|---|---|---|
| 1 | 30.11.1937 | 4,096 | | ದಿ ಎಲೆಕ್ಟ್ರಿಕಲ್ ಇಂಡಸ್ಟ್ರಿಸ್ ಲಿಮಿಟೆಡ್ | | |
| 2 | 31.12.1938 | 5,338 | | ದಿ ಎಲೆಕ್ಟ್ರಿಕಲ್ ಇಂಡಸ್ಟ್ರಿಸ್ ಲಿಮಿಟೆಡ್ | | |
| 3 | 31.12.1939 | 21,939 | | ಎಂ.ಎ.ಶ್ರೀನಿವಾಸನ್ | | |
| 4 | 31.12.1940 | 4,185 | | ಇ.ವಿ. ಗಣಪತಿ ಐಯರ್ | | |
| 5 | 31.12.1941 | 11,968 | | ಇ.ವಿ. ಗಣಪತಿ ಐಯರ್ | | |
| 6 | 31.12.1942 | 60,427 | | ಇ.ವಿ. ಗಣಪತಿ ಐಯರ್ | | |
| 7 | 31.12.1943 | 190,099 | | ಇ.ವಿ. ಗಣಪತಿ ಐಯರ್ | | |
| 8 | 31.12.1944 | 163,266 | | ಎಂ. ಎಲ್. ನರಸಿಂಹ ಐಯಾಂಗಾರ್ | | |
| 9 | 30.06.1945 | 26,275 | | ಎಂ. ಎಲ್. ನರಸಿಂಹ ಐಯಾಂಗಾರ್ | | |
| 10 | 30.06.1946 | 43,619 | | ಎಂ. ಎಲ್. ನರಸಿಂಹ ಐಯಾಂಗಾರ್ | | |
| 11 | 30.06.1947 | 47,615 | | ಬಿ.ಜಿ.ಎ. ಮುದಲಿಯಾರ್ | | |
| 12 | 30.12.1948 | 62,935 | | ಎಂ. ಹ್ಯಯಾತ್ | | |
| 13 | 30.12.1949 | 119,351 | | ಎಂ. ಹ್ಯಯಾತ್ | | |
| 14 | 31.03.1950 | 90,186 | | ಎಂ. ಹ್ಯಯಾತ್ | | |
| 15 | 31.03.1951 | 247,219 | | ಎಂ. ಹ್ಯಯಾತ್ | | |
| 16 | 31.03.1952 | 152,242 | | ಜಿ. ಚಾಂಡಿ | | |
| 17 | 31.03.1953 | 78,414 | | ಜಿ. ಚಾಂಡಿ | | |
| 18 | 31.03.1954 | 61,862 | | ಜಿ. ಚಾಂಡಿ | | |
| 19 | 31.03.1955 | 42,727 | | ಜಿ. ಚಾಂಡಿ | | |
| 20 | 31.03.1956 | 53,420 | | ಜೆ. ಎಲ್. ಡಿ ಸಾ | | |
| 21 | 31.03.1957 | 99,941 | | ಜೆ. ಎಲ್. ಡಿ ಸಾ | | |
| 22 | 31.03.1958 | 112,065 | | ಜೆ. ಎಲ್. ಡಿ ಸಾ | ಜೆ. ಎಲ್. ಡಿ ಸಾ | |
| 23 | 31.03.1959 | 106,494 | | ಜೆ. ಎಲ್. ಡಿ ಸಾ | ಜೆ. ಎಲ್. ಡಿ ಸಾ | |
| 24 | 31.03.1960 | 123,899 | | ಜೆ. ಎಲ್. ಡಿ ಸಾ | ಜೆ. ಎಲ್. ಡಿ ಸಾ | |
| 25 | 31.03.1961 | 220,101 | | ಜೆ. ಎಲ್. ಡಿ ಸಾ | | |

| | ದಿನಾಂಕದ ಅಂತ್ಯಕ್ಕೆ | ದಿನಾಂಕದ ಅಂತ್ಯಕ್ಕೆ ಸ್ಥಿತಿ ವಿವರಣೆ ಪಟ್ಟಿಗೆ ವರ್ಗಾಯಿಸಿದ ಲಾಭದ ಮೊತ್ತ (ರೂ.ಗಳಲ್ಲಿ) | ದಿನಾಂಕದ ಅಂತ್ಯಕ್ಕೆ ಸ್ಥಿತಿ ವಿವರಣೆ ಪಟ್ಟಿಗೆ ವರ್ಗಾಯಿಸಿದ ನಷ್ಟದ ಮೊತ್ತ (ರೂ.ಗಳಲ್ಲಿ) | ಮ್ಯಾನೇಜಮೆಂಟ್ ಏಜಂಟ್ / ಅಧ್ಯಕ್ಷರು / ಕಂಟ್ರೋಲರ್ | ವ್ಯವಸ್ಥಾಪಕ ನಿರ್ದೇಶಕರು | ಷರಾ |
|---|---|---|---|---|---|---|
| 26 | 31.03.1962 | 277,223 | | ಜೆ. ಎಲ್. ಡಿ ಸಾ | | |
| 27 | 31.03.1963 | 138,424 | | ಎಂ. ಸುಬ್ರಮಣ್ಯಂ | | |
| 28 | 31.03.1964 | 44,357 | | ಎಂ. ಸುಬ್ರಮಣ್ಯಂ | | |
| 29 | 31.03.1965 | 0 | 343,128 | ಎಂ. ಸುಬ್ರಮಣ್ಯಂ | | ನಷ್ಟಗಳು ಮುಖ್ಯವಾಗಿ ಸಂಸ್ಥೆಯು ಕೈಗೊಂಡ ವಿಸ್ತರಣಾ ಯೋಜನೆಗಳ ಕಾರ್ಯಾನ್ವಯಕ್ಕಾಗಿ ಮಾಡಿದ ವೆಚ್ಚದಿಂದಾಗಿರುತ್ತದೆ. |
| 30 | 31.03.1966 | 0 | 255,912 | ಎಂ. ಸುಬ್ರಮಣ್ಯಂ | | ನಷ್ಟಗಳು ಮುಖ್ಯವಾಗಿ ಸಂಸ್ಥೆಯು ಕೈಗೊಂಡ ವಿಸ್ತರಣಾ ಯೋಜನೆಗಳ ಕಾರ್ಯಾನ್ವಯಕ್ಕಾಗಿ ಮಾಡಿದ ವೆಚ್ಚದಿಂದಾಗಿರುತ್ತದೆ. |
| 31 | 31.12.1966 | 26,798 | | ಎಂ. ಸುಬ್ರಮಣ್ಯಂ | | |
| 32 | 31.12.1967 | 53,744 | | ಎಂ. ಸುಬ್ರಮಣ್ಯಂ | | |
| 33 | 31.12.1968 | 117,405 | | ಎಂ. ಡಿ. ಶಿವನಂಜಪ್ಪ, ಭಾ.ಅ.ಸೇ. | | |
| 34 | 31.12.1969 | 181,063 | | ಎಂ. ಡಿ. ಶಿವನಂಜಪ್ಪ, ಭಾ.ಅ.ಸೇ. | | |
| 35 | 31.12.1970 | 237,472 | | ಎಂ. ಡಿ. ಶಿವನಂಜಪ್ಪ, ಭಾ.ಅ.ಸೇ. | | |
| 36 | 31.12.1971 | 403,772 | | ಎಂ. ಡಿ. ಶಿವನಂಜಪ್ಪ, ಭಾ.ಅ.ಸೇ. | | |
| 37 | 31.12.1972 | 295,942 | | ಎಂ. ಡಿ. ಶಿವನಂಜಪ್ಪ, ಭಾ.ಅ.ಸೇ. | | |
| 38 | 31.12.1973 | 362,680 | | ಎಂ. ಡಿ. ಶಿವನಂಜಪ್ಪ, ಭಾ.ಅ.ಸೇ. | | |
| 39 | 31.12.1974 | 883,380 | | ಎಂ. ಡಿ. ಶಿವನಂಜಪ್ಪ, ಭಾ.ಅ.ಸೇ. | | |

| | ದಿನಾಂಕದ ಅಂತ್ಯಕ್ಕೆ | ದಿನಾಂಕದ ಅಂತ್ಯಕ್ಕೆ ಸ್ಥಿತಿ ವಿವರಣೆ ಪಟ್ಟಿಗೆ ವರ್ಗಾಯಿಸಿದ ಲಾಭದ ಮೊತ್ತ (ರೂ.ಗಳಲ್ಲಿ) | ದಿನಾಂಕದ ಅಂತ್ಯಕ್ಕೆ ಸ್ಥಿತಿ ವಿವರಣೆ ಪಟ್ಟಿಗೆ ವರ್ಗಾಯಿಸಿದ ನಷ್ಟದ ಮೊತ್ತ (ರೂ.ಗಳಲ್ಲಿ) | ಮ್ಯಾನೇಜಮೆಂಟ್ ಏಜಂಟ್ / ಅಧ್ಯಕ್ಷರು / ಕಂಟ್ರೋಲರ್ | ವ್ಯವಸ್ಥಾಪಕ ನಿರ್ದೇಶಕರು. | ಷರಾ |
|---|---|---|---|---|---|---|
| 40 | 31.12.1975 | | 1,036,410 | ಎಂ. ಡಿ. ಶಿವನಂಜಪ್ಪ, ಭಾ.ಅ.ಸೇ. (ನಿ) | | ತೀವ್ರ ವಿಧ್ಯುತ್ ಕಡಿತದಿಂದಾಗಿ ಕಡಿಮೆಗೊಂಡ ಲ್ಯಾಂಪ್‌ಗಳ ಬಳಕೆ, ಇತರೆ ವಿಧ್ಯುತ್‌ಲ್ಯಾಂಪ್ ತಯಾರಕರ ಮಾರುಕಟ್ಟೆಯ ಪ್ರವೇಶ, ದೇಶದ ಸಾಮಾನ್ಯ ಆರ್ಥಿಕ ಹಿಂಜರಿಕೆ ಲ್ಯಾಂಪ್ ತಯಾರಿಕಾ ಉಧ್ಯಮಗಳ ಮೇಲೆ ಪ್ರಭಾವ ಬೀರಿದ್ದು, ಸಾಮಗ್ರಿಗಳ ಬೆಲೆಯ ಹೆಚ್ಚಳ, ಹೆಚ್ಚಿದ ಕಾರ್ಮಿಕ ವೆಚ್ಚ, ಬಡ್ಡಿ ಮತ್ತು ಇತರೆ ವೆಚ್ಚಗಳ ಹೆಚ್ಚಳ ಇವುಗಳಿಂದಾಗಿ ನಷ್ಟವುಂಟಾಗಿರುತ್ತದೆ. |
| 41 | 31.12.1976 | | 952,936 | ಎಂ. ಡಿ. ಶಿವನಂಜಪ್ಪ, ಭಾ.ಅ.ಸೇ. (ನಿ) | | |
| 42 | 31.12.1977 | 583,038 | | [illegible]. ಹೆಚ್.ಜಿ.ವಿ.ರೆಡ್ಡಿ, ಭಾ.ಅ.ಸೇ. | | |
| 43 | 31.12.1978 | 3,781,788 | | ವಿ. ವೇಣುಗೋಪಾಲ್ ನಾಯ್ಡು, ಭಾ.ಅ.ಸೇ. | | |
| 44 | 31.12.1979 | 7,799,702 | | ವಿ. ವೇಣುಗೋಪಾಲ್ ನಾಯ್ಡು, ಭಾ.ಅ.ಸೇ. | | |
| 45 | 31.12.1980 | 10,509,465 | | ವಿ. ವೇಣುಗೋಪಾಲ್ ನಾಯ್ಡು, ಭಾ.ಅ.ಸೇ. | | |
| 46 | 31.12.1981 | 13,424,164 | | ಬಿ.ಆರ್. ಪ್ರಭಾಕರ, ಭಾ.ಅ.ಸೇ. | | |
| 47 | 30.06.1983 | 8,802,898 | | ಬಿ.ಆರ್. ಪ್ರಭಾಕರ, ಭಾ.ಅ.ಸೇ. | | |
| 48 | 30.06.1984 | 23,483,683 | | ಕೆ.ಎಸ್.ಎನ್. ಮೂರ್ತಿ, ಭಾ.ಅ.ಸೇ. | ಕೆ.ಎಸ್.ಎನ್. ಮೂರ್ತಿ, ಭಾ.ಅ.ಸೇ. | |
| 49 | 30.06.1985 | 24,518,805 | | ಕೆ.ಎಸ್.ಎನ್. ಮೂರ್ತಿ, ಭಾ.ಅ.ಸೇ. | ಕೆ.ಎಸ್.ಎನ್. ಮೂರ್ತಿ, ಭಾ.ಅ.ಸೇ. | |
| 50 | 30.06.1986 | 5,378,573 | | ಕೆ.ಎಸ್.ಎನ್. ಮೂರ್ತಿ, ಭಾ.ಅ.ಸೇ. | ಕೆ.ಎಸ್.ಎನ್. ಮೂರ್ತಿ, ಭಾ.ಅ.ಸೇ. | |

| | ದಿನಾಂಕದ ಅಂತ್ಯಕ್ಕೆ | ದಿನಾಂಕದ ಅಂತ್ಯಕ್ಕೆ ಸ್ಥಿತಿ ವಿವರಣೆ ಪಟ್ಟಿಗೆ ವರ್ಗಾಯಿಸಿದ ಲಾಭದ ಮೊತ್ತ (ರೂ.ಗಳಲ್ಲಿ) | ದಿನಾಂಕದ ಅಂತ್ಯಕ್ಕೆ ಸ್ಥಿತಿ ವಿವರಣೆ ಪಟ್ಟಿಗೆ ವರ್ಗಾಯಿಸಿದ ನಷ್ಟದ ಮೊತ್ತ (ರೂ.ಗಳಲ್ಲಿ) | ಮ್ಯಾನೇಜಮೆಂಟ್ ಏಜಂಟ್ / ಅಧ್ಯಕ್ಷರು / ಕಂಟ್ರೋಲರ್ | ವ್ಯವಸ್ಥಾಪಕ ನಿರ್ದೇಶಕರು | ಷರಾ |
|---|---|---|---|---|---|---|
| 51 | 30.06.1987 | | 3,525,194 | ಎ.ಎಸ್. ಮೇಲಕೋಟೆ, ಭಾ.ಅ.ಸೇ. | ಎ.ಎಸ್. ಮೇಲಕೋಟೆ, ಭಾ.ಅ.ಸೇ. | ದೇಶದಲ್ಲಿ ಹೆಚ್ಚಿದ ಲ್ಯಾಂಪ್ ತಯಾರಿಕಾ ಸಾಮರ್ಥ್ಯದಿಂದಾಗಿ ಲ್ಯಾಂಪ್‌ಗಳ ಬೇಡಿಕೆಗಿಂತ ಉತ್ಪಾದನೆ ಹೆಚ್ಚಾಗಿದ್ದು ತೀವ್ರ ಸಮಸ್ಯೆಗಳು ಮುಂದುವರೆದಿದ್ದು, ಕಾರ್ಯಚರಣೆಯ ಲಾಭಗಳು ಸೀಮಿತಗೊಂಡ ಹಿನ್ನಲೆಯಲ್ಲಿ ಸಂಸ್ಥೆಯು ನಷ್ಟವನ್ನು ಅನುಭವಿಸಿತು. |
| 52 | 30.06.1988 | 1,509,861 | | ಸಿ. ಮುನಿಸ್ವಾಮಿ, ಭಾ.ಅ.ಸೇ. | ಸಿ. ಮುನಿಸ್ವಾಮಿ, ಭಾ.ಅ.ಸೇ. | |
| 53 | 31.03.1989 | 824,017 | | ಸಿ. ಮುನಿಸ್ವಾಮಿ, ಭಾ.ಅ.ಸೇ. | ಸಿ. ಮುನಿಸ್ವಾಮಿ, ಭಾ.ಅ.ಸೇ. | |
| 54 | 31.03.1990 | 4,649,840 | | ಸಿ. ಮುನಿಸ್ವಾಮಿ, ಭಾ.ಅ.ಸೇ. | ಸಿ. ಮುನಿಸ್ವಾಮಿ, ಭಾ.ಅ.ಸೇ. | |
| 55 | 31.03.1991 | 26,760,807 | | ಸಿ. ಮುನಿಸ್ವಾಮಿ, ಭಾ.ಅ.ಸೇ. | ಸಿ. ಮುನಿಸ್ವಾಮಿ, ಭಾ.ಅ.ಸೇ. | |
| 56 | 31.03.1992 | 25,493,824 | | ಸಿ. ಮುನಿಸ್ವಾಮಿ, ಭಾ.ಅ.ಸೇ. | ಸುಭಿರ್ ಹರಿ ಸಿಂಗ್, ಭಾ.ಅ.ಸೇ. | |
| 57 | 31.03.1993 | 12,291,557 | | ಸುಭಿರ್ ಹರಿ ಸಿಂಗ್, ಭಾ.ಅ.ಸೇ. | ಸುಭಿರ್ ಹರಿ ಸಿಂಗ್, ಭಾ.ಅ.ಸೇ. | |
| 58 | 31.03.1994 | | 5,834,817 | ಫಲ್ಗುಣಿ ರಾಜಕುಮಾರ್, ಭಾ.ಅ.ಸೇ. | ಫಲ್ಗುಣಿ ರಾಜಕುಮಾರ್, ಭಾ.ಅ.ಸೇ. | ನಷ್ಟಗಳು ಮಾರುಕಟ್ಟೆಯಲ್ಲಿನ ಹಿಂಜರಿತ, ಅತಿಯಾದ ಕಚ್ಚಾ ಸಾಮಗ್ರಿಗಳ ಬೆಲೆ ಮತ್ತು ಕಡಿತಗೊಂಡ ಮಾರುಕಟ್ಟೆಯ ಬಾಕಿಗಳ ವಸೂಲಿಯಿಂದಾಗಿರುತ್ತದೆ. 31.3.1996ರಂತೆ ಸಂಸ್ಥೆಯ ನಿವ್ವಳ ಮೌಲ್ಯವು ಸಂಪೂರ್ಣ ಸವೆತಗೊಂಡಿದೆ. |
| 59 | 31.03.1995 | | 19,024,822 | ಅಧಿಪ್ ಚೌದರಿ, ಭಾ.ಅ.ಸೇ. | ಅಧಿಪ್ ಚೌದರಿ, ಭಾ.ಅ.ಸೇ. | |
| 60 | 31.03.1996 | | 124,720,668 | ಪಿ. ಡಿ. ಶೆಣೈ ಭಾ.ಅ.ಸೇ. | ಪಿ. ಡಿ. ಶೆಣೈ ಭಾ.ಅ.ಸೇ. | |
| 61 | 31.03.1997 | | 182,518,208 | ಪಿ. ಡಿ. ಶೆಣೈ ಭಾ.ಅ.ಸೇ. | ಪಿ. ಡಿ. ಶೆಣೈ ಭಾ.ಅ.ಸೇ. | |
| 62 | 31.03.1998 | | 111,685,058 | ಬಿ. ಎಲ್. ದೇವರಾಜ | ಹೆಚ್. ನಾಗರಾಜ ಸೆಟ್ಟಿ, ಭಾ.ಅ.ಸೇ. | |
| 63 | 31.03.1999 | | 103,338,074 | ಡಿ. ಎಸ್. ಪಾಲೇಕರ್ | ಡಿ. ಎಸ್. ಪಾಲೇಕರ್ | |
| 64 | 31.03.2000 | | 102,662,874 | ಗುರುಚರಣ್ ಜಿ, ಭಾ.ಅ.ಸೇ. | ಗುರುಚರಣ್ ಜಿ, ಭಾ.ಅ.ಸೇ. | |

| | ದಿನಾಂಕದ ಅಂತ್ಯಕ್ಕೆ | ದಿನಾಂಕದ ಅಂತ್ಯಕ್ಕೆ ಸ್ಥಿತಿ ವಿವರಣೆ ಪಟ್ಟಿಗೆ ವರ್ಗಾಯಿಸಿದ ಲಾಭದ ಮೊತ್ತ (ರೂ.ಗಳಲ್ಲಿ) | ದಿನಾಂಕದ ಅಂತ್ಯಕ್ಕೆ ಸ್ಥಿತಿ ವಿವರಣೆ ಪಟ್ಟಿಗೆ ವರ್ಗಾಯಿಸಿದ ನಷ್ಟದ ಮೊತ್ತ (ರೂ.ಗಳಲ್ಲಿ) | ಮ್ಯಾನೇಜಮೆಂಟ್ ಏಜಂಟ್ / ಅಧ್ಯಕ್ಷರು / ಕಂಟ್ರೋಲರ್ | ವ್ಯವಸ್ಥಾಪಕ ನಿರ್ದೇಶಕರು | ಷರಾ |
|---|---|---|---|---|---|---|
| 65 | 31.03.2001 | | 149,778,878 | ಆರ್. ವಿ.ವೆಂಕಟೇಶ್ | ಇಬ್ರಾಹಿಮ್ ಅದೂರ್, ಕ.ಆ.ಸೇ. | |
| 66 | 31.03.2002 | | 236,046,007 | ಆರ್. ವಿ.ವೆಂಕಟೇಶ್ | ಇಬ್ರಾಹಿಮ್ ಅದೂರ್, ಕ.ಆ.ಸೇ. | |
| 67 | 31.03.2003 | | 575,130,675 | ಆರ್. ವಿ.ವೆಂಕಟೇಶ್ | ಇಬ್ರಾಹಿಮ್ ಅದೂರ್, ಕ.ಆ.ಸೇ. | |
| 68 | 31.03.2004 | | 246,896,859 | ಆರ್. ವಿ.ವೆಂಕಟೇಶ್ | ಎ. ಕೆ. ಸೋಮಣ್ಣ | ಬಿ.ಐ.ಎಫ್.ಆರ್. ಹಾಗೂ ಸರ್ಕಾರದ ಉನ್ನತ ಮಟ್ಟದ ಸಮಿತಿಯ ಶಿಫಾರಸಿನಂತೆ ಸಂಸ್ಥೆಯನ್ನು ಮುಚ್ಚಲು ಸರ್ಕಾರ ದಿನಾಂಕ 4.1.2002ರಲ್ಲಿ ಆದೇಶಿಸಿದೆ. ಸಂಸ್ಥೆಯು ದಿನಾಂಕ 4.1.2002ರ ಸರ್ಕಾರದ ಆದೇಶದ ಮೇರೆಗೆ 12.6.2003 ರಿಂದ ಎಲ್ಲಾ ವಹಿವಾಟುಗಳನ್ನು ಸ್ಥಗಿತಗೊಳಿಸಿದೆ. |
| 69 | 31.03.2005 | | 168,431,043 | | ಎ. ಕೆ. ಸೋಮಣ್ಣ | |
| 70 | 31.03.2006 | 207,819,669 | | | ಎ. ಕೆ. ಸೋಮಣ್ಣ | ಬ್ಯಾಂಕ್ ಹಾಗೂ ಹಣಕಾಸು ಸಂಸ್ಥೆಗಳಿಗೆ ಓ.ಟಿ.ಎಸ್. ಮಾಡಿರುವುದರಿಂದ, ಆ ಸಾಲಗಳ ಮೇಲೆ ಹವಣಿಸಿದ ಬಡ್ಡಿ ರೂ.320956742/- ಗಳನ್ನು ಹಿಂತೆಗೆಯಲಾಗಿದೆ. |
| 71 | 31.03.2007 | | 125,495,534 | | ಎ. ಕೆ. ಸೋಮಣ್ಣ | |
| 72 | 31.03.2008 | | 124,485,742 | | ಜಿ. ಸಿ. ಇಂದ್ರರಾಜ್ ಅರಸ್ | |
| 73 | 31.03.2009 | | 133,730,016 | | ಜಿ. ಸಿ. ಇಂದ್ರರಾಜ್ ಅರಸ್ | |
| 74 | 31.03.2010 | | 136,648,016 | | ಜಿ. ಸಿ. ಇಂದ್ರರಾಜ್ ಅರಸ್ | ಎನ್.ಎಸ್.ಐ.ಸಿ. ಓ.ಟಿ.ಎಸ್. ಮಾಡಲಾಗಿರುತ್ತದೆ. |
| 75 | 31.03.2011 | | 91,568,554 | | ಅನಿಲ್. ಎ. ಉಪ್ಪಿನ್ | ಸಿಡ್‌ಬಿ ಓ.ಟಿ.ಎಸ್. ಮಾಡಲಾಗಿರುತ್ತದೆ. |

| | ದಿನಾಂಕದ ಅಂತ್ಯಕ್ಕೆ | ದಿನಾಂಕದ ಅಂತ್ಯಕ್ಕೆ ಸ್ಥಿತಿ ವಿವರಣೆ ಪಟ್ಟಿಗೆ ವರ್ಗಾಯಿಸಿದ ಲಾಭದ ಮೊತ್ತ (ರೂ.ಗಳಲ್ಲಿ) | ದಿನಾಂಕದ ಅಂತ್ಯಕ್ಕೆ ಸ್ಥಿತಿ ವಿವರಣೆ ಪಟ್ಟಿಗೆ ವರ್ಗಾಯಿಸಿದ ನಷ್ಟದ ಮೊತ್ತ (ರೂ.ಗಳಲ್ಲಿ) | ಮ್ಯಾನೇಜಮೆಂಟ್ ಏಜಂಟ್ / ಅಧ್ಯಕ್ಷರು / ಕಂಟ್ರೋಲರ್ | ವ್ಯವಸ್ಥಾಪಕ ನಿರ್ದೇಶಕರು | ಷರಾ |
|---|---|---|---|---|---|---|
| 76 | 31.03.2012 | | 103,018,752 | | ಅನಿಲ್. ಎ. ಉಪ್ಪಿನ್ | ವರ್ಷಾಂತ್ಯ 31.03.2004ರಿಂದ ನಷ್ಟಗಳು, ಸಂಸ್ಥೆಯು ಮುಚ್ಚಿರುವುದರಿಂದ ಹಾಗೂ ಸರ್ಕಾರದಿಂದ ಪಡೆದ ಸಾಲಗಳ ಮೇಲೆ ಬೆಳದ ಬಡ್ಡಿಯಿಂದಾಗಿರುತ್ತದೆ. |
| 77 | 31.03.2013 | | 110,146,466 | | ಜೆ. ರಂಗರಾಮು | |
| 78 | 31.03.2014 | | 120,714,465 | | ಜೆ. ರಂಗರಾಮು | |
| 79 | 31.03.2015 | | 117,988,830 | | ಜೆ. ರಂಗರಾಮು | |
| 80 | 31.03.2016 | | 116,979,788 | | ಜೆ. ರಂಗರಾಮು | |
| 81 | 31.03.2017 | | 126,505,833 | | ಅನಿಲ್. ಎ. ಉಪ್ಪಿನ್ | |
| 82 | 31.03.2018 | | 128,501,367 | | ಅನಿಲ್. ಎ. ಉಪ್ಪಿನ್ | |
| 83 | 31.03.2019 | | 125,136,197 | | ಬಿ. ಮಹೇಶ್ | |

For The Mysore Lamp Works Ltd.

Managing Director

- ದಿ ಮೈಸೂರ್ ಲ್ಯಾಂಪ್ ವರ್ಕ್ಸ್ ಲಿಮಿಟೆಡ್ ಸಂಸ್ಥೆಯು 21 ಎಕರೆ 6.73 ಗುಂಟೆ ಭೂ ಸ್ವತ್ತನ್ನು ಬೆಂಗಳೂರು ನಗರ ಮಲ್ಲೇಶ್ವರಂ ಪಶ್ಚಿಮ ವಿಭಾಗದಲ್ಲಿ ಹೊಂದಿರುತ್ತದೆ.
- ಸಂಸ್ಥೆಯು ಆರ್.ಎಂ.ವಿ. ಬಡಾವಣೆ (2ನೇ ಹಂತ) ಬೆಂಗಳೂರು ರಲ್ಲಿ ಎರಡು 307.82 ಚದರ ಮೀ. ಹಾಗೂ 309.12 ಚದರ ಮೀ. ವಿಸ್ತೀರ್ಣದ HIG ಬಂಗಲೆಗಳ ಮಾಲೀಕತ್ವವನ್ನು ಹೊಂದಿರುತ್ತದೆ.
- ಸಂಸ್ಥೆಯು Worli Industrial Properties Pvt. Ltd., Mumbai ಯಲ್ಲಿ 879 ಚದರಡಿಯ ಕಛೇರಿಯ ಮಾಲೀಕತ್ವವನ್ನು ಹೊಂದಿರುತ್ತದೆ.
- ಸಂಸ್ಥೆಯು GT Association, Ahmedabad ಯಲ್ಲಿ ಒಟ್ಟು 1043 ಚದರಡಿಯ ಹಾಗೂ 300 ಚದರಡಿ (lower basement) ಜಾಗದ ಮಾಲೀಕತ್ವವನ್ನು ಹೊಂದಿರುತ್ತದೆ.
- TECSOK, ಸಂಸ್ಥೆಯು 2013ರಲ್ಲಿ ಸಂಸ್ಥೆಯ ಆಸ್ತಿಗಳ ಮಾರುಕಟ್ಟೆ ಮೌಲ್ಯಗಳನ್ನು ನಿರ್ಧರಿಸಿತ್ತು. ವಿವರಗಳು ಈ ಕೆಳಗಿನಂತಿದೆ.

| ಸ್ವತ್ತಿನ ವಿವರ | ಮೌಲ್ಯ ಲಕ್ಷ ರೂ.ಗಳಲ್ಲಿ |
|---|---|
| 21 ಎಕರೆ 6.73 ಗುಂಟೆ ಭೂ ಸ್ವತ್ತು | 137312.00 |
| ಎರಡು 307.82 ಚದರ ಮೀ. ಹಾಗೂ 309.12 ಚದರ ಮೀ. ವಿಸ್ತೀರ್ಣದ HIG ಬಂಗಲೆಗಳು | 859.37 |
| Worli Industrial Properties Pvt. Ltd., Mumbai ಯಲ್ಲಿ 879 ಚದರಡಿಯ ಕಛೇರಿ | 261.00 |
| GT Association, Ahmedabad ಯಲ್ಲಿ ಒಟ್ಟು 1043 ಚದರಡಿಯ ಹಾಗೂ 300 ಚದರಡಿ (lower basement) | 80.18 |
| ಕಟ್ಟಡ, ಯಂತ್ರೋಪಕರಣಗಳು, ಮರಮಟ್ಟು ಮತ್ತು ಸಲಕರಣೆ, ಗಣಕ ಯಂತ್ರ ಹಾಗೂ ವಾಹನಗಳು | 161.75 |
| ಒಟ್ಟು | 138674.30 |

- ಸಂಸ್ಥೆಯ ಷೇರುಗಳ ಮೌಲ್ಯವನ್ನು ಈ ಕೆಳಗಿನಂತೆ 2013ರಲ್ಲಿ TECSOK, ಸಂಸ್ಥೆಯು ನಿರ್ಧರಿಸಿತ್ತು.

ಅ) ಆಸ್ತಿಯ ಮೌಲ್ಯವನ್ನು ಮಾರ್ಗಸೂಚಿ ದರದಂತೆ ನಿರ್ಧರಿಸಿ, ಪ್ರತಿ ಷೇರಿನ ಬೆಲೆಯನ್ನು ರೂ.4/- ಎಂದು ನಿರ್ಧರಿಸಿದೆ.

ಆ) ಆಸ್ತಿಯ ಮೌಲ್ಯವನ್ನು ಮಾರುಕಟ್ಟೆ ದರದಂತೆ ನಿರ್ಧರಿಸಿ, ಪ್ರತಿ ಷೇರಿನ ಬೆಲೆಯನ್ನು ರೂ.873/- ಎಂದು ನಿರ್ಧರಿಸಿದೆ.

- 31.03.2020 ರಂತೆ ದಿ ಮೈಸೂರ್ ಲ್ಯಾಂಪ್ ವರ್ಕ್ಸ್ ಲಿಮಿಟೆಡ್ ಸಂಸ್ಥೆಯು ಒಟ್ಟು ರೂ.335.87 ಕೋಟಿಗಳ ಹೊಣೆಯನ್ನು ಹೊಂದಿರುತ್ತದೆ.
- ಸರ್ಕಾರದಿಂದ ಪಡೆದ ಆಧಾರ ಸಹಿತ ಸಾಲಗಳಿಗೆದುರಾಗಿ, ಸಂಸ್ಥೆಯು ತನ್ನ ಆಸ್ತಿಗಳನ್ನು ಸರ್ಕಾರಕ್ಕೆ ಅಡಮಾನ ಮಾಡಿ ಅಡಮಾನ ಪತ್ರವನ್ನು ನೋಂದಾಯಿಸಿದೆ. Registrar of Companies in Karnataka ದಲ್ಲಿ ಅಗತ್ಯ ಹೊಣೆಯನ್ನು ದಾಖಲಿಸಿದೆ.

---